ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 10 ನೇ ಮಾರ್ಚ್, 2020

ಕೃಷಿ ವಿಕಾಸ ಯೋಜನೆಯ ಅವ್ಯವಹಾರದ ಕುರಿತು

ಶ್ರೀ ಎನ್. ರವಿಕುಮಾರ್(ವಿಧಾನಸಭೆಯಿಂದ ಚುನಾಯಿತರಾದವರು):-

559 (580) ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರೇಷ್ಮೋದ್ಯಮ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆಗೆ ಸಹಾಯಧನವಾಗಿ ರೂ.15.54 ಕೋಟಿಯನ್ನು ಸಂಸ್ಥೆಯ ಕೋರಿಕೆಯೇ ಇಲ್ಲದೆ ದಿನಾಂಕ : 30.03.2015ರಂದು ಬಿಡುಗಡೆ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ರೇಷ್ಮೋದ್ಯಮ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆಗೆ ಸಹಾಯಧನವಾಗಿ ನೀಡಿದ ರೂ.15.54 ಕೋಟಿಯನ್ನು ಯಾವ ಉದ್ದೇಶಕ್ಕಾಗಿ ಹಾಗೂ ಯಾವಾಗ ಬಳಸಲಾಗಿದೆ;

(ಇ) ಈ ಮೊತ್ತವನ್ನು ಕೇಂದ್ರ ಸರ್ಕಾರದ ಕೃಷಿ ವಿಕಾಸ ಯೋಜನೆಯ ಅನುಷ್ಠಾನಕ್ಕೆ ಬಳಸದಿರಲು ಕಾರಣವೇನು;

(ಈ) ಅನಗತ್ಯವಾಗಿ ಸರ್ಕಾರದಿಂದ ಹಣ ಪಡೆದು ಬ್ಯಾಂಕಿನಲ್ಲಿ ಡಿಪಾಸಿಟ್ ಮಾಡುವ ಮೂಲಕ ಬಡ್ಡಿಯನ್ನು ಸ್ವಂತ ಉಪಯೋಗಕ್ಕೆ ಬಳಸಿ, ಅವ್ಯವಹಾರ ನಡೆಸಿದ ಅಧಿಕಾರಿಗಳ ಮೇಲೆ ತೆಗೆದುಕೊಂಡಿರುವ ಕ್ರಮಗಳೇನು?